

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 670 |
| ಸದಸ್ಯರ ಹೆಸರು | ಶ್ರೀ ಕೆ. ಹರೀಶ್ ಕುಮಾರ್ |
| ಉತ್ತರಿಸುವ ದಿನಾಂಕ | 17.12.2021 |
| ಉತ್ತರಿಸುವ ಸಚಿವರು | ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕೊರಗ ಜನಾಂಗದ ಕುಟುಂಬಗಳ ಸಂಖ್ಯೆ ಎಷ್ಟು; | ದಕ್ಷಿಣಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ 110 ಕೊರಗ ಕುಟುಂಬಗಳು ವಾಸವಾಗಿರುತ್ತವೆ. |
| ಆ | ಕೊರಗ ಜನಾಂಗದ ಎಲ್ಲಾ ಕುಟುಂಬಗಳು ಸ್ವಂತ ಮನೆ ಹೊಂದಿದೆಯೇ; ಸ್ವಂತ ಮನೆ ಹೊಂದಿಲ್ಲದ ಕುಟುಂಬಗಳ ಸಂಖ್ಯೆ ಎಷ್ಟು; | ಕೊರಗ ಜನಾಂಗದ 109 ಕುಟುಂಬಗಳೂ ಬೆಳ್ತಂಗಡಿಯಲ್ಲಿ ಸ್ವಂತ ಮನೆಗಳನ್ನು ಹೊಂದಿರುತ್ತಾರೆ ಮತ್ತು ಶ್ರೀ ಅಶೋಕ ಪಟ್ಟಣ ಪಂಚಾಯತ್ ಪೌರ ಕಾರ್ಮಿಕರಾದ ಪುತ್ತೂರಿನಲ್ಲಿ ಸ್ವಂತ ಮನೆಯನ್ನು ಹೊಂದಿರುತ್ತಾರೆ.<br>ಹೊಂದಿಲ್ಲದೆ ಇರುವ ಕುಟುಂಬಗಳು ಯಾವುದು ಇಲ್ಲ. |
| ಇ | ಈ ಕುರಿತಂತೆ ಕೊರಗ ಜನಾಂಗದ ಏಳಿಗೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಕೊರಗ ಸಮುದಾಯದವರ ಅಭಿವೃದ್ಧಿಗಾಗಿ ಈ ಕೆಳಗಿನ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>1. **ಮನೆ ನಿರ್ಮಾಣ ಯೋಜನೆ:** ಕೊರಗ ಸಮುದಾಯದವರಿಗೆ ರೂ..3.50ಲಕ್ಷ ಘಟಕ ವೆಚ್ಚದಲ್ಲಿ ಮನೆ ನಿರ್ಮಾಣ ಯೋಜನೆಯನ್ನು ಕೈಗೊಳ್ಳಲಾಗುತ್ತಿದೆ.<br>2. **ಆರೋಗ್ಯ ಕಾರ್ಯಕ್ರಮ:** ಕೊರಗ ಸಮುದಾಯದ ತೀವ್ರತರ ಅನಾರೋಗ್ಯ ಪೀಡಿತರಿಗೆ ಉತ್ಕೃಷ್ಟ ಸೌಲಭ್ಯಗಳನ್ನು ಹೊಂದಿದ ಆಸ್ಪತ್ರೆಗಳಲ್ಲಿ ರಿಯಾಯಿತಿ ದರದಲ್ಲಿ ಉಚಿತ ವೈದ್ಯಕೀಯ ಚಿಕಿತ್ಸೆಯನ್ನು ನೀಡಲಾಗುತ್ತಿದೆ. |

3. **ಕಾಲೋನಿಗಳಿಗೆ ಮೂಲಭೂತ ಸೌಲಭ್ಯ:** ಕೊರಗ ಸಮುದಾಯದ ಕಾಲನಿಗಳಿಗೆ ಕುಡಿಯುವ ನೀರು, ಕೃಷಿ ಜಮೀನು ಹೊಂದಿರುವವರಿಗೆ ನೀರಾವರಿ ಸೌಲಭ್ಯ ಹಾಗೂ ರಸ್ತೆ ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.

4. **ಸ್ವಯಂ ಉದ್ಯೋಗ ಯೋಜನೆ:** ಆಸಕ್ತ ಯುವಕ/ಯುವತಿಯರಿಗೆ ವಿವಿಧ ತರಬೇತಿಗಳನ್ನು ನೀಡಲಾಗುವುದು. ವಾಹನ ಚಾಲನಾ ಪರವಾನಿಗೆ ಮತ್ತು ಬ್ಯಾಡ್ಜ್ ಹೊಂದಿದ ಫಲಾನುಭವಿಗಳಿಗೆ ಅಟೋರಿಕ್ಷಾ, ಪ್ರವಾಸಿ ಕಾರು, ಗೂಡ್ಸ್ ವಾಹನ, ಶೇ.50/.ಸಹಾಯಧನದಲ್ಲಿ ಮಂಜೂರಾತಿ ಮಾಡಲಾಗಿದೆ.
5. **ಪೌಷ್ಟಿಕ ಆಹಾರ ಯೋಜನೆ:** ಈ ಯೋಜನೆಯಡಿ ಮಳೆಗಾಲದ ಅವಧಿಯಲ್ಲಿ ಆರು ತಿಂಗಳುಗಳ ಕಾಲ (ಜೂನ್- ಡಿಸೆಂಬರ್‌ವರೆಗೆ) ಪೌಷ್ಠಿಕ ಆಹಾರ ಸಾಮಗ್ರಿಗಳನ್ನು ಪೂರೈಸುವ ಕಾರ್ಯಕ್ರಮ ಅನುಷ್ಠಾನ ಗೊಳಿಸಲಾಗುತ್ತಿದೆ. ಈ ಯೋಜನೆಯಲ್ಲಿ ಅಕ್ಕಿ-8ಕೆಜಿ, ತೊಗರಿಬೇಳೆ-3ಕೆಜಿ ಹೆಸರುಕಾಳು-1ಕೆಜಿ, ಕಡಲೇಕಾಳು- 1ಕೆಜಿ, ಕಡಲೇಬೀಜ-1ಕೆಜಿ, ಹಲಸಂದೆಕಾಳು-1ಕೆಜಿ, ಹುರಳಿಕಾಳು-1ಕೆಜಿ, ಬೆಲ್ಲ-1ಕೆಜಿ, ಸಕ್ಕರೆ-1ಕೆಜಿ, ಅಡುಗೆಎಣ್ಣೆ- 2ಲೀಟರ್, ಮೊಟ್ಟೆ-30, ನಂದಿನಿ ತುಪ್ಪ 1/2ಕೆಜಿ ನೀಡಲಾಗುತ್ತಿದೆ.
6. **ಶೈಕ್ಷಣಿಕ ಪ್ರೋತ್ಸಾಹಧನ:** ಕೊರಗ ಸಮುದಾಯದ ಎಸ್.ಎಸ್.ಎಲ್.ಸಿ ಮತ್ತು ನಂತರದ ಕೋರ್ಸುಗಳನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ಪ್ರೋತ್ಸಾಹ ಧನವನ್ನು ಈ ಕೆಳಗಿನಂತೆ ವರ್ಷದಲ್ಲಿ 2 ಬಾರಿ ನೀಡಲಾಗುತ್ತಿದೆ.

| ಕ್ರ. ಸಂ. | ಶೈಕ್ಷಣಿಕ ಹಂತ | ಪ್ರೋತ್ಸಾಹಧನ |
|---|---|---|
| 1. | ಎಸ್.ಎಸ್.ಎಲ್.ಸಿ | 10,000.00 |
| 2. | ಪಿ.ಯು.ಸಿ ಮತ್ತು ತತ್ಸಮಾನ ಕೋರ್ಸುಗಳು(ಪ್ರತಿ ವರ್ಷಕ್ಕೆ) | 12,000.00 |
| 3. | ಎಲ್ಲಾ ಪದವಿ | 15,000.00 |
| 4. | ಎಲ್ಲಾ ಸ್ನಾತಕೋತ್ತರ ಕೋರ್ಸುಗಳು (ಪ್ರತಿ ವರ್ಷಕ್ಕೆ) | 18,000.00 |

| | | |
|---|---|---|
| | | **7. ವಿದ್ಯಾವಂತ ನಿರುದ್ಯೋಗಿ ಯುವಕ/ಯುವತಿಯರಿಗೆ ನಿರುದ್ಯೋಗಿಜೀವನ ಭತ್ಯೆ:** ಪರಿಶಿಷ್ಟ ಪಂಗಡದ ಕೊರಗ ಸಮುದಾಯದ ವಿದ್ಯಾವಂತ ನಿರುದ್ಯೋಗಿ ಯುವಕ/ಯುವತಿಯರಿಗೆ ನಿರುದ್ಯೋಗಿ ಜೀವನ ಭತ್ಯೆಯನ್ನು ಮಾಸಿಕವಾಗಿ ಈ ಕೆಳಗಿನಂತೆ ನೀಡಲಾಗುತ್ತದೆ. |

| ಕ್ರ. ಸಂ. | ಶೈಕ್ಷಣಿಕ ಹಂತ | ಪ್ರೋತ್ಸಾಹಧನ |
|---|---|---|
| 1. | ಎಸ್.ಎಸ್.ಎಲ್.ಸಿ | 2,000.00 |
| 2. | ಪಿ.ಯು.ಸಿ ಮತ್ತು ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ | 2,500.00 |
| 3. | ಎಲ್ಲಾ ಪದವಿ | 3,500.00 |
| 4. | ಎಲ್ಲಾ ಸ್ನಾತಕೋತ್ತರ | 4,000.00 |

**8. ಸಾಮೂಹಿಕ ಸರಳ ವಿವಾಹ ಯೋಜನೆಯಡಿ ಆರ್ಥಿಕ ನೆರವು:** ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಸರಳವಾಗಿ ಮದುವೆ ಮಾಡಿಕೊಳ್ಳುವ ಪರಿಶಿಷ್ಟ ಪಂಗಡಕ್ಕೆ ಸೇರಿದ ದಂಪತಿಗಳಿಗೆ ಸರಳ ವಿವಾಹ ಯೋಜನೆಯಡಿ ಒಂದು ಬಾರಿಗೆ ರೂ.50,000.00ಗಳ ಆರ್ಥಿಕ ನೆರವನ್ನು ನೀಡಲಾಗುತ್ತಿದೆ. ಅದರಂತೆ, ಕೊರಗ ಸಮುದಾಯದ 09 ಜೋಡಿಗಳಿಗೆ ರೂ.4.50ಲಕ್ಷ ಅನುದಾನವನ್ನು ನೀಡಲಾಗಿದೆ ಹಾಗೂ ಒಳ ಪಂಗಡಗಳ ಅಂತರ್ ಜಾತಿ ವಿವಾಹ ಪ್ರೋತ್ಸಾಹ ಧನ ಮತ್ತು ಅಂತರ್ ಜಾತಿ ವಿವಾಹವಾಗುವ ದಂಪತಿಗಳಿಗೆ ಪ್ರೋತ್ಸಾಹ ಧನವನ್ನು ನೀಡಲಾಗುವುದು.



(ಬಿ.ಶ್ರೀರಾಮುಲು),
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು